ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ : 758

ಮಾನ್ಯ ಸದಸ್ಯರ ಹೆಸರು : ಶ್ರೀ ಅರವಿಂದಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ: : 20.12.2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಭಾರತದ ಪ್ರಧಾನಮಂತ್ರಿಗಳ ಕನಸಿನ ಯೋಜನೆಯಾದ ಮಿಲ್ಲೆಟ್ ಕ್ರಾಂತಿ ಯೋಜನೆಯನ್ನು ಜಾರಿಗೊಳಿಸಲು ರಾಜ್ಯ ಸರ್ಕಾರವು ಕೈಗೊಂಡಿರುವ ಕ್ರಮಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನದಡಿ ಸಿರಿಧಾನ್ಯಗಳಿಗೆ ಹೆಚ್ಚು ಒತ್ತು ನೀಡಲಾಗುತ್ತಿದೆ. ಈ ಯೋಜನೆಯಡಿ 2021-22ನೇ ಸಾಲಿನಲ್ಲಿ ನ್ಯೂಟ್ರಿ ಸಿರಿಧಾನ್ಯ ಕಾರ್ಯಕ್ರಮವನ್ನು ಸಿರಿಧಾನ್ಯಗಳ (ಮಿಲ್ಲೆಟ್‌ಗಳ) ಕ್ಷೇತ್ರ ವಿಸ್ತರಣೆ ಹಾಗೂ ಉತ್ಪಾದಕತೆ ಹೆಚ್ಚಿಸುವ ನಿಟ್ಟಿನಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಕಾರ್ಯಕ್ರಮಕ್ಕೆ ರೂ.71.71 ಕೋಟಿ ಅನುದಾನ ಮೀಸಲಿರಿಸಲಾಗಿದ್ದು, ಈ ವರೆಗೆ ರೂ. 37.73 ಕೋಟಿ ಬಿಡುಗಡೆಯಾಗಿರುತ್ತದೆ.<br><br>ಮುಂದುವರೆದು, ಈ ಕಾರ್ಯಕ್ರಮದಲ್ಲಿ ಉತ್ಪಾದಕತೆ ಹೆಚ್ಚಿಸುವ ತಾಂತ್ರಿಕತೆಗಳಾದ ಸುಧಾರಿತ ಬಿತ್ತನೆ ಬೀಜ ವಿತರಣೆ, ಬೀಜೋತ್ಪಾದನೆಗೆ ಪ್ರೋತ್ಸಾಹಧನ, ಸಮಗ್ರ ಪೋಷಕಾಂಶಗಳ ನಿರ್ವಹಣೆ, ಸಮಗ್ರ ಪೀಡೆ ನಿರ್ವಹಣೆ, ಸಣ್ಣ, ಅತಿಸಣ್ಣ ರೈತರ ಸದುಪಯೋಗಕ್ಕಾಗಿ ಎತ್ತು ಚಾಲಿತ ಉಪಕರಣಗಳು, ಸ್ಪ್ರಿಂಕ್ಲರ್ ಸೆಟ್‌ಗಳನ್ನು ಸಹಾಯಧನದಲ್ಲಿ ವಿತರಣೆ ಮಾಡಲಾಗುತ್ತಿದೆ ಹಾಗೂ ಸಿರಿಧಾನ್ಯಗಳ ವ್ಯಾಪಕ ಪ್ರಚಾರಕ್ಕಾಗಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ.<br><br>ಇದಲ್ಲದೆ ರಾಜ್ಯದಲ್ಲಿ ಸಿರಿಧಾನ್ಯ ಪ್ರದೇಶವನ್ನು ವಿಸ್ತರಿಸುವ ನಿಟ್ಟಿನಲ್ಲಿ "ರೈತಸಿರಿ" ಯೋಜನೆಯನ್ನು 2019-20ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದ್ದು, ಸಾವಯವ/ಸಾಂಪ್ರದಾಯಿಕವಾಗಿ ಬೆಳೆಯುವ ಸಿರಿಧಾನ್ಯಗಳಾದ ನವಣೆ, ಹಾರಕ, ಸಾಮೆ, ಕೊರಲೆ, ಬರಗು ಮತ್ತು ಊದಲು ಬೆಳೆಗಳನ್ನು (ರಾಗಿ, ಜೋಳ ಮತ್ತು ಸಜ್ಜೆ ಹೊರತುಪಡಿಸಿ) ಬೆಳೆಯುವ ರೈತರಿಗೆ ಬೆಳೆ ಸಮೀಕ್ಷೆ ಆಧಾರದ ಮೇರೆಗೆ ಗರಿಷ್ಠ ಎರಡು ಹೆಕ್ಟೇರ್ ಗೆ ಒಳಪಟ್ಟು ಪ್ರತಿ ಹೆಕ್ಟೇರ್ ಗೆ ರೂ.10000/-ಗಳಂತೆ ಪ್ರೋತ್ಸಾಹ ಧನ ನೀಡಲಾಗುತ್ತಿದೆ. |

<table>
<tr>
<td>ಆ)</td>
<td>ಪೌಷ್ಟಿಕ ಆಹಾರಗಳಾದ ಮಿಲ್ಲೆಟ್, ಜೋಳ, ರಾಗಿ ಮುಂತಾದವುಗಳನ್ನು ನ್ಯಾಯಬೆಲೆ ಅಂಗಡಿಗಳ ಮುಖೇನ ವಿತರಿಸಲು ಕ್ರಮ ಕೈಗೊಳ್ಳಲಾಗಿದೆಯೇ: (ಹಾಗಿದ್ದಲ್ಲಿ, ವಿವರ ನೀಡುವುದು)</td>
<td>ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ಸಂಗ್ರಹಿಸಲಾದ ರಾಗಿ ಮತ್ತು ಜೋಳವನ್ನು ಸಾರ್ವಜನಿಕ ವಿತರಣ ಪದ್ಧತಿಯಡಿ ನ್ಯಾಯಬೆಲೆ ಅಂಗಡಿಗಳ ಮುಖಾಂತರ ಪಡಿತರ ಫಲಾನುಭವಿಗಳಿಗೆ ವಿತರಿಸಲಾಗಿದೆ.</td>
</tr>
<tr>
<td>ಇ)</td>
<td>ಸಾರ್ವಜನಿಕ ಪಡಿತರ ಮೂಲಕ ವಿತರಿಸಲು ಅಗತ್ಯವಿರುವಷ್ಟು ಮಿಲ್ಲೆಟ್, ರಾಗಿ, ಜೋಳ ರಾಜ್ಯದಲ್ಲಿ ಲಭ್ಯವಿದೆಯೇ? (ಪೂರ್ಣ ಮಾಹಿತಿ ನೀಡುವುದು)</td>
<td>ಕೇಂದ್ರ ಸರ್ಕಾರವು ಅನುಮತಿ ನೀಡಿ ಹಂಚಿಕೆಮಾಡಿದ ಪ್ರಮಾಣದ ರಾಗಿ ಮತ್ತು ಜೋಳವನ್ನು ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿ ರಾಜ್ಯದ ರೈತರಿಂದ ಖರೀದಿಸಿ ಪಡಿತರ ಫಲಾನುಭವಿಗಳಿಗೆ ವಿತರಿಸಲಾಗಿದ್ದು, ವಿವರಗಳು ಈ ಕೆಳಕಂಡಂತಿದೆ:<br>(ಪ್ರಮಾಣ ಎಂ.ಟನ್ ಗಳಲ್ಲಿ)
<table>
<tr><th>ಕ್ರ.ಸಂ.</th><th>ಮಾಹೆ</th><th>ರಾಗಿ</th><th>ಜೋಳ</th></tr>
<tr><td>1</td><td>ಏಪ್ರಿಲ್ 2021</td><td>59066.610</td><td>-</td></tr>
<tr><td>2</td><td>ಮೇ 2021</td><td>61879.534</td><td>12461.058</td></tr>
<tr><td>3</td><td>ಜೂನ್ 2021</td><td>61847.248</td><td>17348.740</td></tr>
<tr><td>4</td><td>ಜುಲೈ 2021</td><td>63081.573</td><td>43618.091</td></tr>
<tr><td>5</td><td>ಆಗಸ್ಟ್ 2021</td><td>63034.222</td><td>7294.580</td></tr>
<tr><td>6</td><td>ಸೆಪ್ಟೆಂಬರ್ 2021</td><td>62868.577</td><td>0.000</td></tr>
<tr><td>7</td><td>ಅಕ್ಟೋಬರ್ 2021</td><td>62776.961</td><td>143.700</td></tr>
<tr><td>8</td><td>ನವೆಂಬರ್ 2021</td><td>40680.469</td><td>0.000</td></tr>
<tr><td>9</td><td>ಡಿಸೆಂಬರ್ 2021</td><td>0.000</td><td>0.000</td></tr>
<tr><td></td><td>ಒಟ್ಟು</td><td>475235.194</td><td>80866.169</td></tr>
</table>
ಉಳಿದ ಸಿರಿಧಾನ್ಯಗಳ ಪಡಿತರ ವಿತರನೆಗೆ ಲಭ್ಯವಿರುವದಿಲ್ಲ.</td>
</tr>
</table>

ಸಂಖ್ಯೆ:ಕೃಇ/156/ಕೃಕೇಉ/2021

(ಬಿ.ಸಿ.ಪಾಟೀಲ್)

ಕೃಷಿ ಸಚಿವರು